ಜೆ. ಟಿ. ಜಯರಾಮಯ್ಯ*
ಕೆ. ಎಂ. ಕೃಷ್ಣಕುಮಾರ್ ಯಾದವ್**

# "ಅಮೃತೂರಿನ ಅಪ್ರಕಟಿತ ಶಾಸನ"

ತುಮಕೂರು ಜಿಲ್ಲೆ ಕುಣಿಗಲ್ ತಾ|| ಅಮೃತೂರಿನಲ್ಲಿ ಈ ಶಾಸನವನ್ನು ಇತ್ತೀಚಿಗೆ ಬೆಳಕಿಗೆ ತರಲಾಗಿದೆ. ಅಮೃತೂರು ಹೋಬಳಿ ಕೇಂದ್ರವಾಗಿದೆ. ಬಿ.ಎಲ್. ರೈಸ್‌ರವರ ಕಾಲದಲ್ಲಿ ಇಲ್ಲಿಯ ಎರಡು ಶಾಸನಗಳು ಎ.ಕ. ೧೨ನೇ ಸಂಪುಟದಲ್ಲಿ ಪ್ರಕಟವಾಗಿವೆ.

ಪ್ರಸ್ತುತ ಈ ಶಾಸನವು ಅಮೃತೂರಿನ ದೊಡ್ಡ ಕೆರೆಯ ಬಯಲಿನಲ್ಲಿರುವ ಕುಂಟಪ್ಪನ ಗೂಳಯ್ಯನ ಗದ್ದೆಯ ಬದುವಿನಲ್ಲಿ ನೆಡಲಾಗಿದೆ.

ವಿಜಯನಗರ ಕಾಲದ ಈ ಶಾಸನವನ್ನು ಬರೆದಿರುವುದು ಒಂದು ವೀರಗಲ್ಲಿನ ಹಿಂಬದಿಯಲ್ಲಿ. ತುರುಗಾಳಗವನ್ನು ಸುಂದರವಾಗಿ ಕೆತ್ತಿರುವ ಈ ಹಳೆಯ ವೀರಗಲ್ಲಿನ ಮುಂಭಾಗದಲ್ಲಿ ಶಾಸನವಿಲ್ಲ. ಬಹುಶಃ ಈ ಶಾಸನ ಲಿಪಿಕಾರನು ತಕ್ಷಣಕ್ಕೆ ದೊರೆತ ಈ ವೀರಗಲ್ಲಿನ ಹಿಂಬದಿಯಲ್ಲಿ ಈ ದಾನಶಾಸವನ್ನು ಬರೆದಿದ್ದಾನೆ.

ವಿಜಯನಗರ ಕಾಲದ ಶೈಲಿಯಲ್ಲಿರುವ ಈ ಶಾಸನದಲ್ಲಿ ೧೩ ಸಾಲುಗಳಿವೆ. ಈ ಕಲ್ಲಿನ ಉದ್ದ ೪೮ ಇಂಚುಗಳು ಮತ್ತು ಅಗಲ ೩೬ ಇಂಚುಗಳು, ಅಕ್ಷರಗಳು ೨ಇಂಚುಗಳಷ್ಟು ಗಾತ್ರವುಳ್ಳದ್ದಾಗಿವೆ. ಶಾಸನದ ಕೊನೆಯಲ್ಲಿ ವರಹ ಚಿತ್ರವನ್ನು ಸುಂದರವಾಗಿ ಮತ್ತು ಸ್ಪಷ್ಟವಾಗಿ ಬಿಡಿಸಲಾಗಿದೆ.

## ಶಾಸನ ಪಾಠ

೧ ಸುಬಮಸ್ತು ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕ............
೨ ಸಾವಿರದ ೧೪೦೬ನೆಯ ಸೋಬಕೃತು ಸಂವತ್ಸರದ ಕಾರ್ತಿಕ ಸು ೧೦ಲು
೩ ಬಸುಗುಂಡಿಯಾ ಚಾವಡಿಗೆ ಸಲುವ ಅತಕೂರ ಅಗ್ರಹಾರದ ನಾರಸಿಹ್ಮ
೪ ಸಮುದ್ರ........ನಾಥ ಸಮುದ್ರದ ಎರಡು ಕೆರೆಯ ಜೀರ್ನೋದಾರಣವ
೫ ಮಾಡುವುದಕೆ ನಾರಸಿಹ್ಮ ಒಡೆಯರ ಪ್ರಧಾನ ವಿರೂಪಾಕ್ಷ ಒಡೆಯರು
೬ ನಾರಸಿಹ್ಮನಾಥ ಸಮುದ್ರದ ಕೆರೆಯ ಕೆಳಗೆ ಕೊಡುದಾರಿಯ ಸ್ಥಳದಲ್ಲಿ........
೭ ಯ ಬಿಟ್ಟ.......ಗದೆ........ಬಂಡಿಗಳು ... ಅಯಗಂಡುಗ ಗದೆಯನು........
೮ ಕುಳ .. ಡಿ........ಗ್ರಹಣ ಕಾಲದಲ್ಲೂ ಎರಡು ಕೆರೆಯ ಜಿರ್ನೋದಾರಣ
೯ ಮಾಡುವುದಕೆ ಬಂಡಿಗಳು ಐಯದು............ಇಂತಾಗಿ ಆರೊಬ್ಬರು ತಪ್ಪಿದರು
೧೦ ಅರಸುಗಳು ತಪ್ಪಿದರು ತಂಮ ಮಾತಾ ಪಿತೃಗಳನ್ನು ಕವಿ

* ಇತಿಹಾಸ ಅಧ್ಯಾಪಕರು, ವಿವೇಕಾನಂದ ಕಾಲೇಜು ರಾಜಾಜಿನಗರ, ಬೆಂಗಳೂರು-೫೬೦೦೩೨
** ನಂ. ೨೫, ಕಾವಲ್ ಭೈರಸಂದ್ರ, ಆರ್. ಟಿ. ನಗರ ಅಂಚೆ, ಬೆಂಗಳೂರು-೫೬೦೦೩೨

೧೧ ಲೆಯನು ವಾರಣಾಸಿಯ ಕಡಿಸಿದ ಪಾಪಕೆ ಹೊಹರು ಯಿಂತಪುದಕೆ ವಿರೂಪಾ

೧೨ ಕ್ಷ ಒಡೆಯರ ಸುಂಕದ ಅಧಿಕಾರಿ ಜಂನಯ್ಯರಸರ ಬರಹ ಮಹಾಜನಂಗಳ ವೊಪ್ಪ

೧೩ ...........ರಸಿದವರು.

ಶಾಲಿವಾಹನ ಶಕವರುಷ ೧೪೦೬ನೆಯ ಸೋಬಕೃತ ಸಂವತ್ಸರವು ಕ್ರಿ.ಶ. ೧೪೮೪ರ ಅಕ್ಟೋಬರ ತಿಂಗಳ ೧ನೇ ತಾರೀಖು ಬುದವಾರ(ಪೌರ್ಣಿಮೆ)ಕ್ಕೆ ಸರಿಹೊಂದುತ್ತದೆ. (೧. ಸ್ವಾಮಿ ಕಣ್ಣು ಪಿಳ್ಳೆರವರು 'ಇಂಡಿಯನ್ ಎಫಿಮರೀಸ್' ಸಂಪುಟ V, ಪುಟ ೧೬೧)

[ಕ್ರಿ.ಶ. ೧೪೮೪ರ ಕಾಲಕ್ಕೆ ವಿಜಯನಗರದ ಸಂಗಮ ವಂಶದ ಕೊನೆಯ ರಾಜ ೩ನೇ ವಿರೂಪಾಕ್ಷನ (೧೪೬೫-೧೪೮೫) ಕಾಲಕ್ಕೆ ಸರಿಹೊಂದುತ್ತದೆ.]

ಈ ಶಾಸನದಲ್ಲಿ ಇಂದಿನ ಈ ಅಮೃತೂರನ್ನು ಅತಕೂರು ಮತ್ತು ನಾರಸಿಂಹಸಮುದ್ರ ಎಂದು ಕರೆಯಲಾಗಿದೆ. ಅಮೃತೂರಿನಲ್ಲಿ ದೊರೆತಿರುವ ಮತ್ತೊಂದು ಶಾಸನದಲ್ಲಿಯೂ ಸಹ ಅತಕೂರು ಎಂಬ ಉಲ್ಲೇಖವಿದೆ. (ಎ.ಕ. ೧೨, ಪುಟ ೧೦೭ ಶಾಸನ ಸಂಖ್ಯೆ ೪೦ ಮತ್ತು ೪೨)

ಕೆರೆ ಕಟ್ಟುವುದು ಸಾಮಾನ್ಯ. ಆದರೆ ಅವುಗಳ ರಕ್ಷಣೆಗಾಗಿ ಮತ್ತು ನಿರ್ವಹಣೆಗಾಗಿ ದಾನದತ್ತಿಯನ್ನು ನೀಡಿರುವುದು ಗಮನಿಸಬೇಕಾದ ಅಂಶವಾಗಿದೆ.

ಅಮೃತೂರಿನಲ್ಲಿ ಎರಡು ಕೆರೆಗಳಿವೆ (ದೊಡ್ಡಕೆರೆ ಮತ್ತು ಚಿಕ್ಕೆರೆ) ಈ ಎರಡು ಕೆರೆಗಳ ದುರಸ್ತಿಗಾಗಿ ಬೇಕಾಗುವ ಬಂಡಿಗಳು ಮತ್ತು ಬಂಡಿಗಳು ನಿರ್ವಹಣೆಗಾಗಿ ಕ್ರಮವಾಗಿ ಐಗಂಡುಗ ಬತ್ತದ ಗದ್ದೆಯನ್ನು ದಾನವಾಗಿ ಬಿಡಲಾಗಿದೆ.

ವಿಜಯನಗರದ ರಾಜ ನಾರಸಿಂಹ ಒಡೆಯರ ಪ್ರಧಾನರಾಗಿದ್ದ ವಿರೂಪಾಕ್ಷ ಒಡೆಯರು ಈ ಊರಿನ ಕೆರೆಯ ಕೆಳಗೆ ಕೊಡುದಾರಿಯ ಸ್ಥಳದಲ್ಲಿ ಐಗಂಡುಗ ಗದ್ದೆಯನ್ನು ದಾನವಾಗಿ ಬಿಟ್ಟಿದ್ದಾರೆ. ಆದರೆ ದಾನ ಪಡೆದವನ ಉಲ್ಲೇಖವಿಲ್ಲ.

ಶಾಸನದ ಕೊನೆಯಲ್ಲಿ ಶಾಪಾಶಯದ ನಂತರ ವಿರೂಪಾಕ್ಷ ಒಡೆಯರ ಸುಂಕದ ಅಧಿಕಾರಿ ಜಂನಯ್ಯರಸರ ಬರಹ ಮತ್ತು ಇದಕ್ಕೆ ಮಹಾಜನಂಗಳ ವೊಪ್ಪ. ಈ ಶಾಸನದ ಕಾಲಕ್ಕೆ ಅಮೃತೂರು ಒಂದು ಅಗ್ರಹಾರವಾಗಿತ್ತು. ಆದರೆ 'ಬನುಸಂದಿಯ ಚಾವಡಿ'ಯ ಬಗ್ಗೆ ಈ ತಾಲ್ಲೋಕಿನ ಯಾವುದೇ ಶಾಸನದಲ್ಲಿ ಉಲ್ಲೇಖವಿರುವುದು ಕಂಡುಬರುವುದಿಲ್ಲ.

[ಈ ಶಾಸನದ ಪ್ರತಿ ತೆಗೆಯಲು ಸಹಾಯ ಮಾಡಿದ ಗೆಳೆಯ ಹನುಮನಾಯಕ ಮತ್ತು ಶಾಸನ ಪರಿಷ್ಕರಿಸುವಲ್ಲಿ ನೆರವು ನೀಡಿದ ಗುರುಗಳಾದ ಡಾ॥ ದೇವರಕೊಂಡಾರೆಡ್ಡಿಯವರಿಗೆ ನಮ್ಮ ಕೃತಜ್ಞತೆಗಳು]